# ಕಾಣಿಕೆ

ಕಡೆಂಗೋಡ್ಲು ಶಂಕರ ಭಟ್ಟ.





ಸದಾನಂದ ಕೊ—ಒಪರೇಟಿವ್ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್
ಈ ಛಾಪಖಾನೆಯಲ್ಲಿ ಮುದ್ರಿಸಲ್ಪಟ್ಟು
ಬಾಲಸಾಹಿತ್ಯ ಮಂಡಲ, ಲಿಮಿಟೆಡ್, ಇವರಿಂದ ಪ್ರಕಾಶಿಸಲ್ಪಟ್ಟಿತು.

1927



ಕ್ರಯ ೩ ಆಣೆ.

# ಕಾಣಿಕೆ.



## ಕಾಣಿಕೆ.

ಆವ ಕಾಣ್ಕೆಯ ಕೊಡುವೆ ಕನ್ನಡದ ಮಾತೆ ನಿನ
ಗಾವ ಕಾಣ್ಕೆಯ ಕೊಡುವೆ ಮಮಜನ್ಮದಾತೆ? ||

ಶರನಿಧಿಯ ರನ್ನಭಂಡಾರಗಳನೊಡೆದೊಡೆದು
ಹರಹಿ ಧರೆಯೆಂಬ ನಿನ್ನಾಟದಂಗಣದಿ
ಶಿರದ ರತ್ನಕಿರೀಟಕೋಟಿಯನಲಂಕರಿಸಿ
ಮಿರುಪ ಕೀರ್ತಿಯನು ದೆಸೆದೆಸೆಗೆ ಹಸರಿಪೆನೇ? || ೧ ||

ಕಾರಿರುಳ ಸೆರಗಿನೊಳಗವಿತಿರುವ ತಾರೆಗಳ
ಓರಂತೆ ಹಿಡಿಹಿಡಿದು ಬಳ್ಳಿಮಿಂಚುಗಳ
ದಾರದಿಂ ಕೋದು ನಿನ್ನಯ ಕಂಬುಕಂಧರಕೆ
ತಾರಹಾರವ ತುಡಿಸುವೆನೆ ಎನ್ನ ಜನನಿ? || ೨ ||

ದಿನಕರೇಂದುಗಳ ತಾಳಂಗಳನು ಮಾಡಿ ಭೂ
ವಿನುತೆ ನಿನ್ನಯ ಕೀರ್ತಿಗಾನ ನಿರ್ಝರದೆ
ದಿನವೆಂಬ ನಿಶಿಯೆಂಬ ಹಂಬಲನು ತೊರೆದು ಧಾ
ರಿಣಿಯ ತೇಲಿಸುವೆನೇ? ಹೇಳೆನ್ನ ಜನನೀ || ೩ ||

ಹಿಡಿದೆಳೆದು ತಂದು ಸುಗ್ಗಿಯ ಚಿಗುರನೆಲ್ಲ ನಿ
ನ್ನಡಿಯನೆಡೆಬಿಡದೆ ಭಕ್ತಿಯೊಳಗರ್ಚಿಪೆನೇ?
ಸಡಗರದೊಳೆನ್ನ ಜೀವನದ ಕುಸುಮವನೊಂದೆ
ಹಿಡಿಯೊಳಡಗಿಸಿ ಪಾದಪೂಜೆಗರ್ಪಿಪೆನೇ? || ೪ ||

## ಏತಕಿನಿತುಪಚಾರ.

ಏತಕಿನಿತುಪಚಾರವಯ್ಯ? ತಂದೆಗೆ ನುಡಿದ
ಮಾತನೆಂದುಂ ಮೀರ್ವ ಬಾಲನಲ್ಲ,
ಭೂತಳದ ಬಂಧುಗಳ ಬಿರ್ದಿನುಣಿಸನು ಬಯಸು
ತಾತುರಂಗೊಂಬಾಸೆ ರಸನೆಗಿಲ್ಲ ॥ ೧

ತಂದೆಯಪ್ಪಣೆಗೊಂಡು ಬಂದೆ ನಿಮ್ಮಯ ಮನೆಗೆ
ಸಂದುದೆನ್ನಯ ಕಾಲ, ಪೋಪೆನಿನ್ನು
ಇಂದು ನಿಂದರೆ, ತಂದೆ ಬಂದು ದಾರಿಯ ನೋಡಿ
ಕಂದನಂ ಕಾಣದಿರೆ ಕರೆವನವನು ॥ ೨

ತಡೆದಿರಿಸಲೇಕೆನ್ನ? ಮಡದಿ ಮಕ್ಕಳ ಬಿಟ್ಟು
ಕಡು ಜವದಿ ಪೋಪೆನಾತನ ಕೂಟಕೆ
ತಡವೇನವರು ನಾಳೆ ನಡೆದು ಬಂದರೆ ಸಾಕು
ಬಿಡುವುದೆನ್ನಂ ತಳುವದೀ ನಿಮಿಷಕೆ ॥ ೩

ಸುಳಿಗಾಳಿ ಸುಳಿಸುಳಿದು ಭೋರೆಂದು ಗರ್ಜಿಪುದು
ಮಳೆಯಿಳೆಯು ನಾವೆಯಂ ತೇಲಿಸುವುದು
ಘಳಿಲನೀಗಳೆ ಹೋಗಿ ತೆರೆಗಳೇರದ ಮುನ್ನ
ಇಳಿದು ದೋಣಿಗೆ ನದಿಯ ತಡಿವಿಡಿವೆನು ॥ ೪

ಕತ್ತಲೆಯೊಳೈದುವೆನೆ? ಕೈದೀಪವೆನಗಿಲ್ಲ
ಬಿತ್ತರದ ಧರೆಯೆಂಬ ಗಡಿಗೆಯೊಳಗೆ
ಕತ್ತಲೆಯ ಮಸಿಯೊಸರಿ ಪಸರಿಸದ ಮುನ್ನ ನಾ
ನುತ್ತರಿಪೆನಯ್ಯ ತಡವಿಲ್ಲವೆನಗೆ ॥ ೫

ತಿನಿಸುಣಿಸುಗಳ ಬುತ್ತಿಯನು ಹೊರುವ ಹೊರೆ ಬೇಡ
ಕನಸುನೆಸಸುಗಳ ಮಾರುವ ಮಾರ್ಗದೆ
ಮಿನುಗುವಂಗಡಿಯೊಳಗೆ ಫಲವೆ ಸಿಕ್ಕದೆ? ಪುಣ್ಯ
ವೆನುವ ಹಣವಿರೆ ಕೊಟ್ಟು ಕೊಂಬೆನಯ್ಯ ॥ ೬

ಕೆಲಸವಿರೆ ಬಂದು ಕಾಂಬೆನು, ಕೆಲಸವಿಲ್ಲದಿರೆ
ನೆಲದೊಳಗೆ ಕಂಡುದೇ ಕೊನೆಯ ಕೂಟ
ತಳುವದೆನ್ನಯ ಜೀವಕಳೆಯ ಹೀರುವ ಮೃತ್ಯು
ಸುಳಿವುದೆನೆ ಬಳೆಯುತಿಹುದಂಧಕಾರ || ೭ ||

ಕಂಬನಿಯ ಸುರಿಸದೇ ಸಿಡುಸುಯ್ಯ ಬಿಡದೆ ಮೊಗ
ವಂ ಬಾಡಿಸದೆ, ದೇಹವಂ ಕುನಿಸದೆ
ಹಂಬಲಿಸದಳಲದೇ ಬಳಲದೇ ಮನೆಗೆನ್ನ
ನಿಂಬುಗೊಳಿಸುತೆ ಕಳುಹಿಕೊಡುವುದಯ್ಯ || ೮ ||

ಹರಯದೇಣಿಯನೇರಿ ತೆರೆದು ಮಣ್ಣಿನ ಕದವ
ಸರಿದು ಬಂದರೆ ಮೆರೆವ ಮುಗಿಲೋಳಿಯ
ಅರಮನೆಯ ಮಧ್ಯದೊಳನಂತಸಿಂಹಾಸನದೆ
ನೆರೆ ವಿರಾಜಿಸುವೆನ್ನ ಕಾಂಬುದಯ್ಯ || ೯ ||

---

## ಭಿಕ್ಷುಕ.

(ಸೀಸ ಪದ್ಯ)

ಕೇರಿಕೇರಿಗಳ ಮನೆಮನೆಗಳಂ ಕಂಡೊಡನೆ
ವಾರಾನ್ನಕಾಗಿ ಸಂಚರಿಸುತಿಹೆನು |
ದೂರದೊಳ್ ಪೋಪವರ ಬೆಂಬಿಡದೆ ಕಾಲ್ಗೆರಗಿ
ತೋರಿಪೆನು ಕೈಯೊಳಿಹ ಜೋಳಿಗೆಯನು ||
ಊರೊಳೆನಗೊಲಿದೀವ ದಾನಿಯಂ ಕಾಣೆ ಪರ
ಲೋಕ ಮಾರ್ಗವನರಸಿ ಪೋಪೆನಿನ್ನು |
ಧಾರಿಣಿಯೊಳೆನ್ನರಸನೆಲ್ಲಿಹನೊ ತಿರಿತಿರಿದು
ಬಳಲಿ ಬೆಂಡಾಗಿ ಕಂಗೆಟ್ಟೆ, ನಾನು || || ೧ ||

ಸಿರಿಯ ಬಳ್ಳಿಯ ಸೊಂಪಿನಿಂದೆ ನಗೆಯೆಂಬ ಹೂ
ವರಳಿ ಕಂಪಿನಲಂಪನೀವುದೆಲ್ಲಿ |
ಕೊರಗುತಿಹ ಬಡತನದ ಕಣ್ಣೀರೆ ಕಾಲಾಗಿ
ಹರಿದು ತಂಪನು ತಾನೆ ಕೊಡುವುದಲ್ಲಿ ||
ಪರಿಗೆಡಿಪ ಸಂಕಟದ ನಿಬಿಡಾಂಧಕಾರವದು
ದಾರಿಗಾಣದ ತೆರದೊಳಾವರಿಸಿರೆ |
ಮಿರುಗುತಿಹ ಗುಣವೆಂಬ ನಸುಬೆಳಕನೊಪ್ಪಿಸುತೆ
ತಳತಳಿಸಿ ಬೆಳಗುತಿಹುದೊಂದು ತಾರೆ || || ೩

ಧನವಿಪ್ಪ ಕೈಗುದುರೆಯಂ ದಾನ ಮಾರ್ಗದಿಂ
ಮನವೆಂಬ ಕಡಿವಾಣವೆಳೆಯುತಿಹುದು |
ಸಿರಿಯ ರೆಕ್ಕೆಗಳಿರದೆ ಬಗೆಹಕ್ಕಿ ಹಾರಲ
ವ್ವಳಿಸಿ ಕಳವಳಿಸಿ ಬೀಳುತ್ತಿರ್ಪುದು ||
ಸರಿಯೆನಿಸಿ ಕೈಗೆ ಬಗೆ, ಬಗೆ ಕೈಗೆ ಜೋಡೆನಿಸಿ
ಮೆರೆಯಲುಂಟೇ ಧರಾಮಂಡಲದೊಳು |
ಅರಸ ತಲೆವಾಗಿಸುವೆ ನೀನೊರ್ವನೇ ದಾತ
ನಿರದೆ ತಿರಿದುಂಬೆ ನಿನ್ನರಮನೆಯೊಳು || || ೪

ದೇಹದೀ ಪಾತ್ರೆಯಂ ನಿನ್ನ ಕೈಗೊಪ್ಪಿಸುವೆ
ಮನಕೆ ಮೆಚ್ಚೆಂತಾದುದಂತೆ ಮಾಡು |
ಜೀವದಾನದಿನದಂ ತುಂಬಿಪೆಯೊ ತುಂಬಿಸದೆ
ಬಿಸುಡುವೆಯೊ ನೀನೆ ನಿನ್ನೊಳಗೆ ನೋಡು ||
ಧಾರಿಣಿಯ ಸಂತೆಯೊಳು ಭಿಕ್ಷುಕನ ಮಾಳ್ಕೆಯೊಳು
ತಿರುಗಿದರೆ ಬಪ್ಪ ಬಡತನವದೇನೈ |
ನೀನೆ ಧನಿ ಜಗಕೆಲ್ಲ, ನಿನ್ನ ಧನವೆನ್ನ ಸಿರಿ
ಭೇದವಿಲ್ಲದ ಮೇಲೆ ಮರುಕವೇನೈ || || ೫

---

# ದಿನದ ಕೆಲಸ.

ಇರುಳ ಹೂವಳ್ಳಿಯಲಿ ದಿನದ ಹೂವಾಯ್ತು
ಪರಿಮಳವು ದೆಸೆದೆಸೆಗಳಲಿ ಹರಡಿ ಹೋಯ್ತು
ತರಳ ನೀನೇಕೆ ನಿದ್ದೆಯೊಳೆ ಮೈಮರೆವೆ?
ಧರಣಿ ನಗುತಿಹುದು, ನೀನೆಂದು ಕಣ್ದೆರೆವೆ? || ೧ ||

ದೇವನಾ ಕತ್ತಲೆಯ ಕಣ್ಣೆವೆಯು ತೆರೆಯೆ
ಭೂವಲಯಕಾದುದೀ ಬೆಳಕೆಂಬ ಸಿರಿಯೆ
ಕಾವನ ಕಟಾಕ್ಷವೆಂಬಮೃತಧಾರೆಯೊಳು
ನೋವನೆಲ್ಲವ ಕಳೆದು ಮೆರೆಯಲಿನ್ನೇಳು || ೨ ||

ಮೂಡುಬೆಟ್ಟದ ಮೇಲೆ ಮೂಡಿರುವ ಭಾಸು
ಬಾಡಿ ಬಸವಳಿದು ಶರಧಿಯೊಳಿಳಿಯೆ ನೀನು
ಬೇಡವೆಂದರು ತೆರಳಬೇಕೆಂದು ಮನೆಗೆ
ರೂಢಿಯಧಿಪತಿ ಕಾಲನಪ್ಪಣೆಯು ಧರೆಗೆ || ೩ ||

ತಾವರೆಯನರಳಿಸುವ ತರಣಿಗೊಪ್ಪಿಸುವ
ತೀವುವ ಮರಂದವನು ತುಂಬಿಗಾಗಿಸುವ
ಭೂವಲಯದಲಿ ಕೆಲಸವಿಲ್ಲವೆಂದಿಹುದೆ
ಜೀವನವು ಸಂಕಟಕೆ ಸೆಡೆಯಲೇನಹುದೆ || ೪ ||

ಬಿಸಿಲೇರುತಿಹುದು ತಪನನ ತಾಪದಿಂದೆ
ಬಸವಳಿಯುತಿಹುದು ಸುಮನೋವೃಂದವಿಂದೆ
ಬಿಸಿಲ ಬೆಂಕೆಗೆ ಬೆದರದೆನ್ನ ಮರಿಯಾನೆ
ಜಸದ ಮಾರ್ಗದೊಳೆ ಹೋಗಿದರೊಳೆನ್ನಾಣೆ || ೫ ||

ಉರಿಯಿಂದೆ ನೊಂದು ಜೀವನದ ಕೆಲಸದಲಿ
ಸರಿವಂದು ಬಗೆಗೊಂಬ ಕಾಡುದಾರಿಯಲಿ
ಅರಳಿ, ಗರಳವನೆದೆಯ ಮರೆಯೊಳಳವಡಿಸಿ
ಕರೆವ ನಗೆಮುಗುಳಿಂಗೆ ಸೋಲದಿರು ಬಯಸಿ || ೬ ||

ಬಡತನದ ಮಗನೆ! ಧನಿಕನ ನೆಳಲನ್ನೈದಿ
ಗೆಡೆಸೊಗವನುಂಬ ಯೋಜನೆ ಬೇಡ ಮನದಿ
ನಡೆದು ದಾರಿಯಲಿ ಬೆಂಡಾಗಿ ಬಸವಳಿಯೆ
ಕೊಡದೆ ತಂಪನು ಕೆಲದ ಮರದನೆಳಲಡಿಯೆ? ॥ ೭

ಆಡುವವರುಂಟು, ಕೊಂಡಾಡುವವರುಂಟು
ಕೂಡಿ ನಲಿವವರುಂಟು ಕೈಬಿಡದರುಂಟು
ಗೂಡಿಂಗೆ ಹಕ್ಕಿಗಳು ಹಾಡುತಿರೆ ದಿನದ
ಹಾಡಳಿಯೆ, ನೀನೊಬ್ಬನೇ ನಿನ್ನ ಕೆಲದಿ ॥ ೮

ಒಂದು ಮುಂಜಾವಕ್ಕೆ ಸಂಜೆಯೊಂದಿಹುದು
ಮಂದಹಾಸವನಳಲ ಮಂಜು ಮುಸುಕುವುದು
ಅಂಜಲೇತಕೊ? ನಿನ್ನ ದಿನದ ಸಂಕಟವು
ಬಂಜೆಯಾಗುವುದೆ? ನಿನಗದುವೆ ಭೂಷಣವು ॥ ೯

ಇಳಿವ ಸಂಜೆಯು ಕಂಡು ಮುದುರುತಿಹ ಸುಮದ
ಕೆಳೆತನವು ನಿನಗೆ, ತನ್ನಯ ಕೆಲಸ ಮುಗಿದ
ಬಳಿಕ ಪಸರಿಸುವದರನರುಗಂಪಿನಂತೆ
ಬಳಸುತಿರೆ ಕೀರ್ತಿ ನಿನಗಿನ್ನಾವ ಚಿಂತೆ? ॥ ೧೦

---

## ಪ್ರೇಮಪಾಶ.

ಹೆತ್ತ ಮಕ್ಕಳ ಮೇಲೆ ಮಾತೆಗಿಹ ಮಮತೆಯನು।
ಮನವೆಂಬ ಮಾನದಿಂದಳೆಯಬಹುದೇ? ॥
ಕತ್ತಲೆಯ ಸೆರಗಿನಿಂದಿಡಿಕಿರಿಸಿ ತಾರೆಗಳ।
ನಡಗಿಸುವ ರಾತ್ರಿಗೇಂ ಲಾಭವಿಹುದೇ? ॥
ಬಾಂದಳದ ಮಂದಿರಕೆ ರವಿಯೆಂದು ಬರುವನೋ।
ಕಂದರನು ಕೊಲುವ ನಿಷ್ಕರುಣಿಯೆನುತೆ ॥
ಸಂದೇಹದಿಂದೆ ನಿದ್ರಿಸಳು, ಸಂಚರಿಸಿ ಸೋ।
ಯುವಳು ನಿಶಿಯೆಂಬ ಭಯಚಕಿತ ಮಾತೆ ॥ ॥ ೧

ಕೋಳಿಯೆಚ್ಚರುತೆ ಯಮದೂತಸಂದದಿ ಕೆಲೆವ
ಭೀಕರ ಧ್ವನಿಯೆ ಕಿವಿಯನು ಕೀಲಿಸೆ |
ತಾಳಲಾರದೆ ತೊಳಲಿ ದಿಗ್ವಿವರವಂ ಹುಗುವೊ
ಡಿಂಬಿಲ್ಲದಿರೆ ಹೆಚ್ಚೆ ಪುತ್ರರಾಶೆ ||
ಬಾಳಲಾರದೆ ಮರುಗಿ ಹಿಮದ ಕಂಬನಿಗಳಂ
ಸುರಿಸಿ ಎದೆಯೊಡೆದು ಬೆಳ್ಳಾಗುತಿಹಳು |
ಹೇಳಲೇನೆಡೆಯೆಡೆಯ ಮುಗಿಲ ಮರೆಯೊಳೆ ಮಕ್ಕ
ಳನು ಮರೆಯಿಸಲ್ ಹವಣನೆಸಗುತಿಹಳು || || ೨ ||

ಏನನೆಸಗಿದರೇನೊ? ಕೋಪಾರುಣನ ಮೊಗದ
ಕೆಂಗಿಡಿಗಳನು ಕಂಡು ನಡುನಡುಗುತೆ |
ತಾನೆ ಮಕ್ಕಳ ಹಿಡಿದು ಬಿಗಿದ ತಳ್ಕೆಯ ಭಾರ
ದಿಂದೆ ಕೆಡೆವಳು ರಾತ್ರಿಯೆಂಬ ಮಾತೆ ||
ಜಾನಿಸದೆ ಬಂಧಿಸಿದ ಮೃತ್ಯುಪಾಶವ, ತಾಯ
ಬಾಹುಪಾಶದ ಸವಿಯ ಸವಿಯುತಿರುವ |
ಸೂನುಗಳ್ ದೀರ್ಘನಿದ್ರೆಯೊಳೆ ಮೈಮ್ಮರೆದು ತಾ
ವನವರತ ಹೊಂದುವರನಂತಪದವ || || ೩ ||

---

## ಪೂರ್ವಸ್ಮರಣೆ

ಹೋದೆಳ ಹರೆಯವೆ! ಬಂದಿನ್ನೊಮ್ಮೆ ವಿ
ನೋದವನೆಲ್ಲವನೆದೆಗೊಳಿಸು
ಆದರದಿಂ ಬಾಳೆಂಬೀ ಬಳ್ಳಿಯ
ಹೂದೊಡವಿಂ ನೀ ಸಿಂಗರಿಸು || ೧ ||

ಮಾವಿನ ಮರದಾ ತೂಗುಂಗೊಂಬಿನೊ
ಳಾವಗಮುಯ್ಯಲನಾಡಿದೆನು
ನೋವನು ತಿಳಿಯದ ಶುಕಪಿಕಸಮಿತಿಯು
ಸೋವುತೆ ನಲಿನಲಿದಾಡಿದೆನು || ೨ ||

ತೆಂಗಿನ ಕೌಂಗಿನ ತೋಟದ ಸಿರಿಯಾ
ಸಿಂಗರದರಮನೆಯಾಳೆನಿಸಿ
ಭೃಂಗಕಲಧ್ವನಿಸಂಗಕೆ ಹಾಡಸು
ಸಂಗಳಿಸಿದೆ ನಾನನುಗೊಳಿಸಿ || ೩

ಬಿಸಿಲೊಳಗೊರಗುವ ಶಾಲಿವನಂಗಳ
ಹೊಸಗಂಪಿನ ಸೆರೆಯಾಳೆನಿಸಿ
ನಸುನಗೆ ಬೀರುವ ಸೃಷ್ಟಿಯ ಸೊಬಗಿನ
ಹಸದನವನು ನೋಡಿದೆನೆಳಸಿ || ೪

ಹಸುರೆಲೆಯೊಪ್ಪುವ ಹಾಸಿನೊಳೊರಗುತೆ
ಹಸಿವಾಸರ್ಗಳ ಪರಿ ಪರಿಯ
ಮಸುಗುವ ತುಂಬಿಯ ಬಂಬಲಹಂಬಲ
ಹೊಸ ದನಿಗೇಳ್ದೆನು ಬಗೆ ತಣಿಯೆ || ೫

ದೂರದ ದಾರಿಗಸೂರನು ಸೇರಲು
ಆರಿವನೆನ್ನುತ ಹರಿದೋಡಿ
ಸೇರಿದೆ ಮನೆಬಾಗಿಲ ತಾಯಲಿ ನಿಜ
ಧೀರತೆಯನು ಬಲು ಕೊಂಡಾಡಿ || ೬

ನೆಳಲೊಳು ಪಂತವ ನೆಲೆಗೊಳಿಸುತೆ ತಾ
ನಳವಳಿಯದೆ ಬಳಿಹಿಡಿದೈದಿ
ಬಳಲುತೆ ಬಾಡುತೆ ಬಳ್ಕುತೆ ತಾಯೊಳು
ಕಳವಳವನು ಹೇಳಿದೆ ಮುದದಿ || ೭

ಜಗವೆಂಬಾಟದ ಬಯಲಲಿ ನಲಿಯುತೆ
ಬಗೆಬಗೆಯಾಟವನಾಡಿದೆನೈ
ಸೊಗದುಣಿಸುಣ್ಣುತೆ ನಿದ್ದೆಯ ದಾದಿಯು
ಬಿಗಿವಾ ತಳ್ಕೆಯೊಳೊರಗಿದೆನೈ || ೮

ದಿನದರಮನೆಯಾ ಬಾಗಿಲ್ದೆರೆವಾ
ಜಿನುಗುವ ಪಡಿಯುರಹಕ್ಕಿಗಳ

ದನಿಯನು ಕೇಳುತೆ ಕಣ್ದೆರೆದೇಳುತೆ
ಬಿನದದೆ ತೋರಿದೆನಾಟಗಳ || ೯ ||

ಆಗಸಗರಡಿಗೆಗೊಪ್ಪುವ ಮಿಸುನಿಯು
ಬೀಗದ ಮುದ್ರೆಯ ತೆರನೆಸೆದು
ಸಾಗುವ ನೇಸರ ಬಿಸಿಲೊಳು ಬೇಸರ
ನೀಗುತೆ ನಲಿದೆನು ಮನವೊಲಿದು || ೧೦ ||

ಕಾಲದ ಶರಧಿಯ ಬಲ್ದೆರೆಯಂತಿರೆ
ಸಾಲಿಡುವೀಗಳಿಗೆಗಳೆಳೆದು
ಕಾಲನು ಕದಲಿಸಿ ಜವ್ವನ ಸುಳಿಯಲಿ
ತೇಲಿಸಿ ಮುಳುಗಿಸುತಿಹವಿಂದು || ೧೧ ||

ವಿಧಿಯೇ ನೀನೆಳೆ ಹರೆಯದ ಚಿತ್ರವ
ಪದಪಿಂ ಜೀವನಪಟದೊಳಗೆ
ಮೊದಲಿಂ ತುದಿವರೆಗೂ ಬರೆಯದೆ ಕ
ಲ್ಲೆದೆತನವನೆ ತೋರಿದೆ ಎನಗೆ || ೧೨ ||

ಅರಿಯದ ತೆರದಿಂ ಸಮಯದ ಚೋರಂ
ಹರೆಯದ ಕಾಲಿಡುತೆನ್ನಿಂದ
ಹರಿದೆಳೆ ಹರೆಯದ ಭಾಗ್ಯವನೆಲ್ಲವ
ಮರೆಯಾದನು ಕಣ್ದೆಸೆಯಿಂದ || ೧೩ ||

ಸಿರಿಯೆನಿಸುವ ದಿನವಳಿಯುವ ಕತದಿಂ
ಬರುತ ಬರುತ ಬಡತನ ಹೊಂದಿ
ಮರುಕದೆ ಮುಪ್ಪಿನ ಗುಡಿಸಲ ಮಧ್ಯದಿ
ಹರಣಂಗಳನುಳಿವುದೆ ಮುಂದೆ? || ೧೪ ||

ಹೋಪುದು ಹೋದರೆ ಬಪ್ಪುದು ಬಂದರೆ
ನಾ ಪಳವಿಪ ಮಾನವನಲ್ಲ
ನೀ ಪೋದೊಡೆ ಬಾಲ್ಯವೆ! ಕಡು ನೊಂದೀ
ತಾಪದೆ ಕೊಂಡಾಡುವೆನಲ್ಲ! || ೧೫ ||

ಹೋದೆಳೆ ಹರೆಯುವೆ! ಬಂದಿನ್ನೊಮ್ಮೆ ವಿ
ನೋದವನೆಲ್ಲವನೆದೆಗೊಳಿಸು
ಆದರದಿಂ ಬಾಳೆಂಬೀ ಬಳ್ಳಿಯ
ಹೂದೊಡವಿಂ ನೀ ಸಿಂಗರಿಸು ॥ ೧೬ ॥

---

## ಮುಗುಳು.

ಬಿರಿಮುಗುಳೇ 'ಎನ್ನೆದೆಯುರಳುತ್ತಿರ
ಲುರವಣಿಸುವ ನರುಗಂಪುಗಳ
ಪರಿಗಳನರಿವವರಿಲ್ಲೆಂದೇತಕೆ
ಕೊರಗುವೆ ನೋಯಿಸುತಂಗಗಳ? ॥ ೧ ॥

ವನಮಧ್ಯದೊಳೇ ಹುಟ್ಟಿದ ನಿನ್ನನು
ಜನರೀಕ್ಷಿಸೆ ಕಣ್ಣೆಂಜಲನು
ಮಿನುಗುವ ಕಾಯವು ಸಹಿಪಂತಿರೆ ದೇ
ವನು ಕೊಟ್ಟಿಹನೇ ಶಕ್ತಿಯನು? ॥ ೨ ॥

ನಿನ್ನೆಳನಗೆಯುಂ ಕಂಡವನೊರ್ವಂ
ಬಣ್ಣಿಸಿ ಬರೆಯನೆ ಕವಿತೆಗಳ
ಕನ್ನಡ ಹಕ್ಕಿಯ ದನಿ ಬಿತ್ತರಿಸದೆ
ನಿನ್ನಯ ಜನುಮದ ಸಫಲತೆಯ? ॥ ೩ ॥

ಒರಗೆಲೆ ಮುಗುಳೇ ವನಮಧ್ಯದೊಳೇ
ಬಿರಿಪೀ ನಿನ್ನೆದೆ ಸಿಂಗರವ
ಬರೆವಾನೇ ನಿನ್ನಯ ನೇಹಿಗನೈ
ತೆರೆ ಎದೆಯೆಂಬೀ ಬೊಕ್ಕಸವ ॥ ೪ ॥

ನೀನೇ ಸರಸಂ ನಾನೇ ರಸಿಕಂ
ನೀನೆರೆಯುಂ ನಾಂ ಯಾಚಕನೈ

ನೀನೇ ಬಿನ್ನಣಿಯಾನೇ ಒರೆವವ
ನಾನೇ ನಿನ್ನಯ ನೇಹಿಗನೈ ‖ ೫ ‖

ನಿನ್ನಂತಿರೆ ಕಾಡಿನೊಳರಳಿದೆನೈ
ನಿನ್ನಂತಿರೆ ಮರವಿನೊಳಿಹೆನೈ
ನಿನ್ನಂತಿರೆ ಕಣ್ದೆರೆಯಂ ತೆರೆದೆಂ
ನಿನ್ನಂತಿರೆ ಕಣ್ಮುಚ್ಚುವೆನೈ ‖ ೬ ‖

ಬಗೆಯೆಂಬೀ ಕೋಲಿನ ತುದಿಗಿಡುವೆಂ
ಜಗವಂ ನಿನ್ನಂ ನನ್ನಿಯಿದು
ಜಗವಂ ಕೊಡುವೆಂ, ಮುಗುಳಂ ಪಡೆವೆಂ
ಮಿಗಿಲೈ ಜಗದಿಂ ನೀನಿಂದು ‖ ೭ ‖

ಕಾಡಿನೊಳೊರಗೈ ಕಣ್ದೆರೆಯದಿರೈ
ನಾಡಿನ ಮಾಟವ ನೋಡುವೆಯಾ
ಕಾಡದು ಮುಗ್ಧತೆಯರಮನೆಯಾದರೆ
ನಾಡೆನೆ ಮಾಯೆಯ ಸೆರೆಮನೆಯೈ ‖ ೮ ‖

ನೀನೊರಗಿದರೂ ಪರಿಮಳವೊಂದೇ
ಮಾನವರನು ಸೋಲಿಸದಿಹುದೇ
ನೀನಳಿಯದಿರಲು ನಿನ್ನೀ ಕಂಪನು
ಮಾನಿಸರಾರೈ ಭೂತಳದೆ ‖ ೯ ‖

ಜೀವಸವಿರುತಿರೆ ಬೇವವರುಂಟೈ
ಸಾವಿನೊಡನೆ ಕೀರ್ತಿಯು ಸಂಟು
ಸಾವೊದಗಲು ನಿನ್ನಯ ಗುಣಗಣಗಳ
ನೋವಿಂದಲಿ ನುತಿಸುವರುಂಟು ‖ ೧೦ ‖

ತುಂಬಿಯೆ ಜೇನಂ ತುಂಬಲು ನಿನಗಿ
ನ್ನಿಂಬಿಲ್ಲವೊ ಹೋಗೆಂದಪೆನೈ
ಸಂಭ್ರಮವೇತಕೊ ಬಿರಿಮುಗುಳೊರಗಿಹು
ದೆಂಬೆಂ ಕಂಬನಿದುಂಬುವೆನೈ ‖ ೧೧ ‖

## ಆಕಾಶವಾಣಿ.

ಬೆಗಸದ ಮೊಗವರುಣ
ರಾಗರಸದಿಂದೊಪ್ಪ
ಲಾಗ ಹೋದವನೇಕೆ ಬಾರನಿನ್ನೂ ‖
ಸೋಗಿಲೊಳು ಮಲಗಿಸಿದೆ
ತೂಗುದೊಟ್ಟಿಲೊಳಿಟ್ಟೆ
ನೇಗಳುಂ ರಕ್ಷಿಸಿದೆನೆಳೆಹರೆಯದಿ ‖ ೧ ‖

ಎಲೆಲೆ ದಾರಿಗ ಹೇಳ
ನೆಲದಗಲದಲಿ ಕಂಡ
ತಿಳಿವುಂಟೆ ನಿನಗೆನ್ನ ಸುಕುಮಾರನ? ‖
ಬಲಿತೆನ್ನ ಜೀವನದ
ಲಲಿತ ಲತೆಗಿವನೊಂದೆ
ಅಲರೆನಲ್ಕಿರ್ದು ಹೋದನೆ ಬಾರನೈ ‖ ೨ ‖

ಹೊಂಬಣ್ಣವೊಪ್ಪಲಿನಿ
ಸುಂಬಾಗಿದಂಗವಾ
ಚೆಂಬಿಸಿಲನಣಕಿಸುವ ನಗೆಯು ನಲ್ಮೆ ‖
ಇಂಬೆನಿಪ ಮೊಗದೊಳೆ ನಿ
ಗುಂಬಿಸಿದ ಕಣ್ಬೊಗರು
ತುಂಬುಮೆಯ್ತುಂಬು ಜವ್ವನವೆಳೆಯುಗೆ ‖ ೩ ‖

ಧನವವನೊಳಿಲ್ಲ ಕಂ
ಬನಿಯೆಂಬ ಧನವುಂಟು
ಜನರವಂಗಿಲ್ಲ ಬಡತನವದುಂಟು ‖
ತನುಜನಂ ನೀಂ ಕಂಡೊ
ಡೆನಗುಸಿರು ಕೈಮುಗಿವೆ
ನೆನಲು ದಾರಿಗನಾದ ಪಡಿನುಡಿದನು ‖ ೪ ‖

ತಾಯೆ! ಜಗದೊಳು ತಿರಿದೆ
ನಾಯುತಿಯ ಬೆಂಬಿಡದೆ
ಕಾಯಕಷ್ಟಕೆ ನೊಂದು ಬೆಂದೆ ಮನದಿ ||
ನೋಯದಿರು, ಪಥಿಕರ ಸಿ
ಕಾಯದಲಿ ಕಾಣೆನಾ
ನೀಯಿರವಿನೊಳ್ಗವರನನು ಲೊದಿ || ೫ ||

ಎಲೆಲೆ ನಾವಿಕ ಹೇಳ
ಜಲನಿಧಿಯ ನಾವೆಯೊಳು
ಅಲೆವೆನ್ನ ಬಾಲನನು ಕಂಡುದುಂಟೇ ? ||
ನೆಲದೊಳೆನ್ನಯ ಬಾಳ್ಕೆ
ಮಳವಳಿದುದೆಂದಾಕೆ
ಕಳವಳಿಸೆ ಕೇಳಿ ನಾವಿಕನೆಂದನು || ೬ ||



ಶರನಿಧಿಗೆ ನಾವೆಯಲಿ
ಸರಿದರೆನಿಬರೊ ತಾಯೆ
ತರಳನನು ಕಾಣೆ ನಾಂ ಮುಳುಗೇಳುವ ||
ಪರಿಪರಿಯ ಮಾನವರ
ಪರಿಕಿಸಿದೆನೆನಲಾಗ
ಹಿರಿದೆನಿಸುವಾಕಾಶವಾಣಿಯಾಯ್ತು || ೭ ||

ಮಾತೆ ಚಿಂತಿಸಲೇಕೆ
ಪಾತಕಂಗಳ ದಾರಿ
ಭೂತಳದೊಳೆನ್ನ ಸುತ್ತಿಸಿತು, ಬಳಿಕ ||
ಸೋತು ಸುತ್ತಿದೆನು ಭುವ
ನಾತೀತ ಮಂದಿರಕೆ
ನೀತಿಮಾರ್ಗವ ಹಿಡಿದು ಬಂದೆನಮ್ಮ || ೮ ||

ಧರಣಿಯಲಿ ಕಣ್ಣೀರ
ಶರಧಿಯಂ ದಾಂಟಿದೆನು
ಭರದಿಂದೆ ಹರಿತಂದೆನದರ ದಡಕೆ ||

ಮರುಕವೇಕೆಲೆ ಮಾತೆ
ಹರಿದು ಪಾಶವನೀಗ
ಪರಮ ಮುಕ್ತಿಯ ಸೇರಿ ಸಂಚರಿಪೆನು ॥ ೯ ॥

ತೀಡುತಿಹ ತಂಬೆಲರೊ
ಳಾಡುವ ವಿಹಂಗದೊಳು
ಹಾಡುತಿಹ ಕಾಳ್ಪುರದೊಳೆಂದೆಂದಿಗೂ ॥
ಕೂಡಿ ನಿನ್ನಯ ನಿದ್ದೆ
ಹಾಡನೆಡೆಬಿಡದೆ ಕೊಂ
ಡಾಡುತಿಹೆನಾಡುತಿಹೆನೆನ್ನ ಜನನೀ ॥ ೧೦ ॥

---

## ನಗೆ.

ಮೊಗದ ಸಿರಿನಗೆಯೆಂಬ ಜಗವ ಮೋಹಿಪ ಮುದ್ದು
ಮಗಳ ಪಡೆದೊಸಗೆಯಿಂದೊಪ್ಪಿರ್ದಳು
ಮೊಗದ ಸಾಮ್ರಾಜ್ಯದಲಿ ಮಿಗೆ ನಲಿದು ಸಂತಸದಿ
ಜಗವನೆಲ್ಲವ ನೋಡಿ ನಗುತಿರ್ದಳು ॥ ೧ ॥

ಎಸೆವ ಹಾಸವ ಬೀಸಿ ನೋಟಕರ ಕಣ್ಣೆಂಬ
ಮಿಸುಪ ಹಕ್ಕಿಗಳ ಹಿಡಿಹಿಡಿದು ತಾನೆ
ಬಸವಳಿಸಿ ತನ್ನ ನಗೆ ಮಗಳ ಮಾಟಕ್ಕೆ ಸ
ಲ್ಲಿಸಿ ನೋಡಿ ನಲಿದಾಡುತಿಹಳು ಜಾಣೆ ॥ ೨ ॥

ಕವಡು ಬಿಜ್ಜೆಯ ತೋರಿ, ಮಗಳು ಮೋಹವನೂರಿ
ತವಕದಿಂದೈತರುವ ಜನರ ಮನವ
ಜವದಿಂದೆ ಯೌವನದ ಕೋಟೆಯಲಿ ಸೆರೆಯಿಡುತ
ಲವಳಬ್ಬೆಗೊದವಿಸುತ್ತಿಹಳು ಮುದವ ॥ ೩ ॥

ಬಗೆಯೆಂಬ ಬಾಣಸಿಗನಾನಂದದೂಟವನು
ನಗೆಗೆ ತಂದೊಪ್ಪಿಸುತ್ತಿರುವನವನು

ಸೊಗದುಣಿಸನಡಲಿಕಿದು ಪಡಿಯಕ್ಕಿಯೆಂಬಂತೆ
ಮೊಗರಾಗವನು ಪಡೆದು ತೆರಳುತಿಹನು || ೪ ||

ಈ ಪರಿಯೊಳಿರುತಿರಲು ಶ್ರುತಿಯೆಂಬ ಮಂತ್ರಿಯಸು
ತಾಪದಿಂ ನೊಂದು ತಾನಿಂತೊರೆದನು
ಪಾಪಕಾರ್ಯದೊಳಿಳಿದರಾವಫಲವೆಂದದಕೆ
ನಾಪೇಳ್ವೆನಬ್ಬೆ ಕೇಳೌ ನುಡಿವೆನು || ೫ ||

ಜರೆಯ ಬಲಕಿದಿರೊಡ್ಡಿ ನಿಲುವ ಬಲವನು ಕಾಣೆ
ಧರೆಯಲ್ಲಿ, ನಗೆಯೆಂಬ ನಿನ್ನ ಸುತೆಯು
ಹೊರೆವ ಸಂಭ್ರಮದೊಳೇ ಮೆರೆವ ಕರಣಂಗಳವು
ಭರದಿ ಮೀರವೆ ನಿನ್ನಯ ಕೈಯ ಹಿಡಿಯ || ೬ ||

ನೇತ್ರನೆನ್ನಂ ದಾಂಟಿ ನಡೆವನೌ ಮಂತ್ರದಲಿ
ಪಾತ್ರತೆಯು ಹೋಯ್ತೆನ್ನ ಪಾಡಳಿದುದು
ಶತ್ರುಘಾಟಿಯ ಭೇರಿ ಕಿವಿಯ ಕೀಲಿಸುತಿಹುದು
ಗಾತ್ರವದು ಕುಂದಿ ಸಡಿಲಾಗುತಿಹುದು || ೭ ||

ಸುತೆಯು ಮೋಹವನುಳಿಯೆ ಗತಿಯ ಸಾಧಿಸಲಹುದು
ಹಿತವಹುದು ಕಡೆಗಾಲಕಿದನು ಕೇಳಿ
ಮತಿಯ ಬಲದಿಂ ವಿಚಾರಿಸುತಲಾವುದಕೆ ಸ
ಮ್ಮತಿಯದೇನೆಂದು ತಿಳಿಯಿಪುದು ಹೇಳಿ || ೮ ||

ಇದನಾಲಿಸುತ್ತಾಕೆ ಮಗಳ ಮುಂದಿರಿಸುತ್ತೆ
ಮುದುಕ! ನಿನಗೇಕೆಮ್ಮ ಸುಖದ ಚಿಂತೆ
ಮದದಾನೆ ಹಿಂಡೆಮ್ಮ ಸದನವನು ಕಾಯುತಿರೆ
ಅದಕಾವ ಭಯ! ಎಂದು ನುಡಿದಳಂತೆ || ೯ ||

ದಿನವಿಂತು ಸಾಗಿದುದು, ಕಾಲಸೂತ್ರದಲಿ ಸಂ
ಜನಿಸುತಿಹ ಋತುವೆಂಬ ಬೊಂಬೆಯಾಟ
ಜನಕೆ ಸಂತಸವನೊದವಿಸಿತು, ಮೊಗಸಿರಿಗೆ ಯೌ
ವನದ ಕೋಟೆಯಲಿ ದೊರೆತನ ಸೊಗಸಿತು || ೧೦ ||

ನಗುವ ಸುಗ್ಗಿಯೊಳೊಮ್ಮೆ ಮೊಗದ ಸಿರಿ ಮೋಹದಾ
ಮಗಳ ಕಾಣದೆ ಮಮ್ಮಲಂ ಮರುಗುತೆ
ಬೆಗಡುಗೊಳ್ಳುತೆ ಮಂತ್ರಿಯನು ಕರೆದು ಕೇಳುತಿರೆ
ಮೊಗಸದಾ ಶ್ರುತಿಕಿವಿಡುಗೊಂಡಿರ್ದುದು ॥ ೧೧

ಕಣ್ಣು ಕಾಣದ ತೆರದಿ ಸುಮ್ಮನಾಗಲು ಮೂಗು
ಬಿನ್ನನೇ ಮೂಗುವಡೆದಂತಿರಲ್ಕೆ
ಅನ್ನೆಯವದಾರಿಂದೆ ಸಮನಿಸಿತೆನಲು ಕೈಯ
ಕನ್ನಡಿಯೆ ಬಂದಿಂತು ನುಡಿದುದಾಗ ॥ ೧೨

ಎಲೆ ಮೊಗವೆ! ನಿನ್ನ ಮಗಳಿದ್ದ ಸಿಂಗರಗೋಟೆ
ನೆಲಕೆ ಸಮವಾಗಿ ಸೆರೆಮನೆಯೊಳಿಹಳು
ಬಲವೆಲ್ಲ ಜರೆಯ ಕೈಯೊಳಗಾಯ್ತೆನುತ ನರೆಯ
ಗೆಲವಿನ ಪತಾಕೆಯನು ಕನ್ನಡಿಸಿತು ॥ ೧೩

ಮೊಗದ ಸಿರಿ ಜರೆಯೊಡನೊಡಂಬಡಿಕೆಯನು ಮಾಡಿ
ಮಗಳನೊಮ್ಮೊಮ್ಮೆ ಕಾಂಬಾ ಸೌಖ್ಯವೆ
ಮಿಗಿಲಾಗೆ, ಕಂಬನಿಯನುಂಡು ಕಡು ಜವ್ವನದ
ಸೊಗದ ರೋಗಕೆ ಮರ್ದನೆಸಗುತಿಹಳು ॥ ೧೪

ಮೊಗಸಿರಿಗೆ ಸಿರಿಯಾಗಿ, ನಗೆಯೊಳೆಳನಗೆಯಾಗಿ
ಬಗೆಗೆ ಬಗೆ ತಾನಾಗಿ ನಿತ್ಯನೆನಿಸಿ
ಜಗದ ದೇಹದೊಳಗಿಪ್ಪಾತ್ಮಂಗೆ ಮೆಚ್ಚದೀ
ಮೊಗಕೆ ಹುಸಿ ನಗೆಗಳ್ಗೆ ಮೆಚ್ಚಬಹುದೇ ॥ ೧೫

---

## ಸಂದೇಶ.

ತಂಗಾಳಿ: ದೂರದಿಂ ತಂದಿಹೆನು ಶೋಕವಾರ್ತೆಯ ಪರಿಯ
ನೀರನಂ ಕಂಡು ಬಂದಿಹೆನು ನಿನ್ನಯ ಬಗೆಯ
ಗಾರುಮಾಡುವೊಡೆನಗೆ ಬಾಯಿಲ್ಲವೆಲೆ ಬಾಲೆ
ಕಾಲಗತಿಯನು ಮೀರಬಲ್ಲರೆಲ್ಲಿದರಬಲೆ? ॥ ೧

ಪದ್ಮಿನಿ: ತಂಗಾಳಿ, ನಿನ್ನ ದನಿಗೇಳಿ ಧೈರ್ಯವ ತಾಳಿ
ಮುಂಬರಿದು ಬಂದಿಹೆನು ನಿನ್ನ ಹೆಸರಂ ಹೇಳಿ
ಬೆಂದೊಡಲ ಬೇನೆಯಂ ಕಳೆವೆನೆಂದರೆ ತಂದೆ
ತಂದ ತಣ್ಪಿಂದ ಮರಣದ ತಣ್ಪನೇ ತಂದೆ. ॥ ೨ ॥

ತಂಗಾಳಿ: ರಣರಂಗದಲ್ಲಿ ರಿಪುಭಟರ ತೊತ್ತಳದುಳಿದು
ಬಳಲಿ ಕೈಗುಂದಿ ನಿಜಕಳೆಯಳಿಯಲಳವಳಿದು
ಪರರ ಕರವಶನಪ್ಪ ವೀರನಂದದಿ, ತರಣಿ
ಹರಿವ ಕತ್ತಲೆಗೆ ಸೆರೆಯಾಳಾದನೆಲೆ ತರುಣಿ. ॥ ೩ ॥

ಪದ್ಮಿನಿ: ಎನ್ನ ಮೋಹದ ಕಂದವಳಿಯೆ ಜೀವನಕಂದ
ಇನ್ನುಂಟೆ? ಮೃತ್ಯುವಿಳಿಯೆಲಿ ಸುಳಿವ ಮಂಜಿಂದ
ಎನ್ನಿನಿಯನೆಂದ ಸಂದೇಶಂಗಳನು ಕೇಳಿ
ಬನ್ನಗಳ ನೀಗುವೆನು, ಸುಡಿಯೆಲವೊ ತಂಗಾಳಿ. ॥ ೪ ॥

ತಂಗಾಳಿ: ತರುಣಿ, ನಿನ್ನಯ ನೀರನೊರಗುತಿರೆ ಮುನ್ನೀರ
ತಳದೊಳೆನ್ನಸು ಕಂಡು ಮರುಕವಿನಿಸೆನು ತೋರ
ಇಳೆಯ ಬೆಳಗುವ ನಗೆಯೆ ಮೊಗವ ಬಾಸಣಿಸುತಿರೆ
ಮುಳುಗಿದನು, ನಗೆಯುದುವೆ ಸಂದೇಶವಾಗುತಿರೆ. ॥ ೫ ॥

ಪದ್ಮಿನಿ: ಎಲೆವಾಯು, ಮತ್ಪ್ರಾಣವಾಯುವಂ ನಿನಗೀವೆ,
ಬಳಲಿರುವ ದೇಹವನು ಭೂಮಾತೆಗರ್ಪಿಸುವೆ,
ದಿನಕೆ ಸಿರಿಯನು ಕೊಡುವೆ, ಮನವನಿನಿಯನ ಪಾದ
ತಲದೊಳರ್ಪಿಸೆ, ದೊರೆಯದಿರುವುದೇ ಮುಕ್ತಿಪದ? ॥ ೬ ॥

ಪ್ರೇಮವಿಂತೊರೆಯುತಿದೆ, "ಮೃತ್ಯು! ನಿನ್ನೊಡೆತನಕೆ
ನೇಮದಿಂ ತಲೆವಾಗಿಸುವೆ, ನಿನಗೆ ಜಯವಕ್ಕೆ"
ಪ್ರೇಮಕಾಗಳೆ ಮೃತ್ಯು ಪಡಿನುಡಿಯ ಕೊಡುತಿಹುದು
"ನೀನಲ್ಲದಿರಲೆನ್ನ ಸೆಲೆಗೆ ಹುರುಳೆತ್ತಣದು?" ॥ ೭ ॥

---

## ತಾರೆ.

ಆಕಾಶಮಧ್ಯದಲಿ ಮಿರುಗುತಿಹ ತಾರೆ! ನಿ
ನ್ನಾಕಾರವನು ನೋಡಿ ಮರುಳಾದೆನು;
ಏಕಾಕಿಯಾಗಿ ಕಾರಿರುಳೊಳಲೆಯಲು ಬೆಳಕ
ನೀ ಕರುಣಿಸದಿರೆ ಕರುಣಿಪನಾವನು? || ೧

ದಿನದಾಯುವಳಿದಿಹುದು, ಕತ್ತಲೆಯೆ ಮುಳಿದಿಹುದು,
ಮನದ ಮೌನದ ಮರೆಯೊಳಿಹುದು ಭೀತಿ.
ಕನಸಲ್ಲ, ನೆನಸಲ್ಲವೇನಿದೆಂಬುದನರಿಯ
ದೆನಗೆ ನೀನೊಬ್ಬನೇ ಕೈಗೊಡುವನು. || ೨

ನಿನಗೆನಗೆ ಸಂಯೋಗವೆಂತು ಸಂಘಟಿಸುವುದೋ?
ದಿನದ ಲೆಕ್ಕವದೆನಗೆ; ದಿನದಳಿವನು
ಗಣಿಯಿಸುವ ಕೆಲಸವೊಂದೇ ನಿನಗೆ. ನಮ್ಮ ಸ
ಚ್ಚಿನ ಫಲವು ಕೈಸಾರ್ವುದೆಂತರಿಯೆನು. || ೩

ದಿನವೆನ್ನ ನೂಕುವುದು, ದಿನವನಾಂ ನೂಕುವೆನು,
ಜನಿಯಿಸುವ ಕತ್ತಲೆಗೆ ಸೆರೆಯುಪ್ಪೆನು;
ಕನಿಕರದೊಳೆನ್ನ ಸೆರೆಬಿಡಿಸಿ ಕೊಂಡೊಯ್ವುದಿಂ
ದಿನ ಭಾರ ನಿನಗೆ ನಾಳೆಯು ನಲ್ಮೆಗೆ. || ೪

ಇಂದು ನೀನೆನ್ನನಗಲಿದರೇನೊ? ನಾಳೆ ನಾಂ
ಬಂದು ಬೆಂಬಿಡಿವೆನಿದು ಹುಸಿಯಾಗದು.
ಸಂದೇಹವೇನೊ? ಹಲರಿಲ್ಲವೊಬ್ಬನೆ ಕಣ್ಣ
ಮುಂದೆ ನಲಿವೈ ನೀನೆ ಬಂಧುವೆನಗೆ! || ೫

ದಿನದ ಮರಣದ ನಡುವೆ ನಿನ್ನ ದಿವ್ಯಜ್ಯೋತಿ
ತನಗೆ ತಾನೇ ಮೂಡಿ ಮರೆಯುಪ್ಪುದು.
ದಿನಕಳಿವು ಸಮನಿಸಲಿ ನಿನ್ನ ದಿವ್ಯಜ್ಯೋತಿ
ಯನವರತ ಬೀಳಲೆನ್ನಯ ದೃಷ್ಟಿಗೆ! || ೬

ಘೋರಾಂಧಕಾರವಡಗಿಸಲಿ ದಿನದಾಯುವನು!
ಮೇರೆ ಮೀರಲಿ ಕತ್ತಲೆಂಬ ಕಡಲು!
ತಾರೆ! ನೀನೆನ್ನ ತಾರಕನಾಗಿರಲು ದಡವ
ತೋರಿಸುವ ತರಣಿಯೇತಕೆ ಹೋಗಲು? || ೭ ||

## ದೊರೆ.

(ಉತ್ಸಾಹ ರಗಳೆ)

ಸುಳಿವ ಮೆಲ್ಲೆಲರ್ಗೆ ತಲೆಯನೊಲೆದು, ನಿನ್ನ ಸೋಂಕಸರಿಯೆ
ಪುಳಕಚಯವನೊಂದಿದಂತೆ ತಳಿರ ಸೊಬಗು ರೂಡಿವಡೆಯೆ, ||
ನಲಿವ ನಲ್ಮೆ ನುಣ್ಪುವಡೆಯೆ, ಮನದ ಬೇನೆ ತಣ್ಪುವಡೆಯೆ,
ಮೆರೆವ ಲತೆಯೊಳಡಗುತೆನಗೆ ತೋರದಿರ್ಪುದೇಕೆ ದೊರೆಯೆ! || ೧ ||

ಆ ವಸಂತವೊಪ್ಪುತಿಹುದು, ಚಿಗುರೆ ಜಗವ ಬಾಸಣಿಪುದು,
ಕೋಗಿಲೆಗಳ ದನಿಯ ಸವಿಯು ಸವಿಯಲಾಸೆಯಾತುರಿಪುದು; ||
ಭೂವನಿತೆಯ ಯೌವನಾನುರಾಗರಸದ ರೂಪಕದೊಳು
ತೀವಿ ಹಸುರ ಪರದೆಯೊಳಗೆ ತೋರದಿರ್ಪೆಯೇಕೆ ಪೇಳು. || ೨ ||

ಕೆಂಬಿಸಿಲ ಕಿರೀಟವೀಗಳಿಂಬುಗೊಂಡು ಶೋಭಿಸುವುದು,
ತುಂಬಿ ಜಗವ ಗಾನರಸದೆ ಪಕ್ಕಿಪಂಡು ಗೊಂದಳಿಪುದು; ||
ಸಂಜೆ ಹೊಂಜೆರಗಿನೊಳರಸ ನಿನ್ನ ಪದವ ತೊಡೆವಳವಳು
ಬಂಜೆಯಾಯ್ತು ನಿನ್ನ ಕಾಣದೆನ್ನ ದೃಷ್ಟಿಯೇಕೆ ಪೇಳು. || ೩ ||

ಗಗನವೆಂಬ ಮಂಡಪದಲಿ ನಿನಗೆ ರಾಜ್ಯಭಾರವಂತೆ,
ಜಗವೆ ನಿನ್ನ ಪೆರ್ಮೆಯೊಪ್ಪುವೋಲಗಕ್ಕೆ ಸಾಲೆಯಂತೆ, ||
ಒಡೆಯ, ನಿನ್ನ ಕಾಂಬ ಸಂಭ್ರಮಂಗಳಿಂತು ಪೆರ್ಚುತಿರಲು
ಸಡಗರವೇ ಶೂನ್ಯವಾಗದಿಹುದೆ ನಿನ್ನ ಕಾಣದಿರಲು? || ೪ ||

ಗಾನದೆಡೆಯ ನುಣ್ಪು ನೀನೆ, ಗಂಧವಹನ ತಂಪು ನೀನೆ,
ಜೇನ ಸೋನೆಯಿಂಪುನೀನೆ, ಬಿರಿವ ಮುಗುಳ ಕಂಪು ನೀನೆ, ||
ಭಾನುವಿಂಗೆ ಭಾಸು ನೀನೆ, ಕರಣವೆಂಬ ದಾರಿವಿಡಿದು
ನೀನೆ ಮನದ ರಾಜ್ಯದೊಳಗೆ ದೊರೆಯೆನಿಸುತೆ ಮೆರೆವುದೊಲಿದು! || ೫ ||

## ವಿರಹಿಣೀ ಗೀತ.

ಒಳನಗೆಯ ಮಾಯೆಯನು ತೋರುತೆನ್ನಯ ಬಗೆಯ
ಕಳುವುದೇತಕೊ? ನಿನಗೆ ಕೈ ಮುಗಿವೆನು.
ಕಳವು ನಿನ್ನಯ ಮನದ ಮೆಚ್ಚಾದರೀ ತನುವ
ಕಳೆದು ಬಿಸುಡುವುದು ಕೊಂಡೊಯ್ವುದದನು. || ೧

ಎಂದು ಕಣ್ಣೀರಿಸಲಿ ಪುಳಕವೆನ್ನುವ ಮಡಿಯ
ಚಂದದಿಂದುಟ್ಟು ಹೃದಯೇಶ ನಿನ್ನ
ಒಂದೆ ಮನದಿಂದ ಪೂಜಿಸಿದೆನೆನ್ನಯ ಭಾವ
ಮಂದಿರದಿ, ಬಂದು ಕರೆದೊಯ್ವುದೆನ್ನ. || ೨

ಜನರೆಲ್ಲ ನಿದ್ದೆಯಿಂದೊರಗಿರುವ ಸಮಯದಲಿ
ಇನಿಯ! ನಿನ್ನಯ ಹಾವಭಾವಗಳನು
ನೆನೆನೆನೆದು ಬಳಲಿ ಬೆಂಡಾಗಿ ಕಣ್ಮುಚ್ಚುತಿರ
ಲಿನನುದಿಸಿ ಬಾಂದಳದೊಳುದಿಸುತಿಹನು. || ೩

ಧರೆಯೆಲ್ಲ ನಗುತಿಹುದು ತರಣಿ ಕಿರಣಾವಳಿಯು
ಬಿರುಸಿಂಗೆ ಬೆದರಿ ತಮವೋಡುತಿರಲು,
ಎರೆಯ! ನೀನಿಲ್ಲದಿರಲೆನ್ನ ಮನವೆಂಬ ಗುಹೆ
ಸೆರೆಹಿಡಿಯುತಿಹುದು ಕತ್ತಲೆಯನೆಲ್ಲ. || ೪

ಒಂದು ತಂಗಾಳಿ ಸಾಕೊಂದು ಕೋಗಿಲೆಯ ದನಿ
ಯೊಂದು ತುಂಬಿಯ ಗಾನ, ವೊಂದಬ್ಜದ
ಮಂದಹಾಸವೆ ಸಾಕು! ಸುಂದರಾಂಗನೆ ನಿನ್ನ
ದೊಂದು ವಿರಹ ವ್ಯಥೆಯನೆದೆಗೊಳಿಸಲು. || ೫

ನೀನಗಲಿದರು ನಿನ್ನ ಮೊಗವನಗಲದ ನಗೆಯ
ದೇನನೆಸಗಿದರು ಬಿಡದೆನ್ನ ಮನವ.
ತಾನೆ ನಾನಾಕಾರವನು ತೋರಿ ನಿನ್ನೆಡೆಗೆ
ಸಾನುರಾಗದೊಳೆಳೆಯುತಿಹುದು ಬಗೆಯ. || ೬

ತಡೆಯಲಾರೆನೊ ಮಂದಹಾಸದೊಂದುಪಟಳವ
ಬಿಡಲಾರೆನದರ ನೆನಹಿನ ಸೌಖ್ಯವ.
ಒಡೆಯ! ನಿನ್ನೊಡನೆ ಕೈಯೊಡ್ಡಿ ಬೇಡುವೆನಿಂತು
ಕೊಡು ನಿನ್ನ ನಗೆಯ, ಕೊಳ್ಳೀಭಾವವ. || ೭ ||

---

## ಇಂದು.

ಇಂದೆಂಬ ದಿನವೆನಗೆ, ನಾಳೆಯೆಂಬುದು ನಿನಗೆ
ಸಂದೇಹವೇನೊ? ತಲೆಬಾಗಿಸುವೆನೀವಿಧಿಗೆ.
ಇಂದೊದಗುವೈಸಿರಿಗೆ ಬಡತನಕೆ ನಾನಾಳು,
ಮುಂದಿನಾ ದಿನದ ಸಾಮ್ರಾಜ್ಯವನು ನೀನಾಳು || ೧ ||

ಇಂದೆಂಬ ತೊಟ್ಟಿಲಲಿ ತೂಗುತಿಹ ಶಿಶುವಾನು,
ಬಂದು ಹಿಡಿದೆಳೆದೆನ್ನ ಕೊಂಡೊಯ್ಯು ಕೈ ನೀನು.
ಇಂದಿನಾ ದಿನದೊಡನೆ ಮುಗಿಯಲೆನ್ನಯ ಬಾಳು,
ಮುಂದಿನಾ ದಿನದ ಸಾಮ್ರಾಜ್ಯವನು ನೀನಾಳು. || ೨ ||

ಕಳೆದ ನಿನ್ನೆಗಳೆಲ್ಲಿ? ಬರುವ ನಾಳೆಗಳೆಲ್ಲಿ?
ಅರಿಯಲಾರೆನು ದೇವ, ನೀ ಗೈವ ದಾನದಲಿ
ಕರುಣಿಸಿಂದಿನ ದಿನವನಿದರೊಳೇ ಮನವೆನಗೆ.
ದೊರೆವ ನಾಳೆಯ ಸಿರಿಯು ಸಾಮ್ರಾಜ್ಯವದು ನಿನಗೆ. || ೩ ||

ಉದಯರವಿಯನು ಕಂಡು ಕೈಮುಗಿವ ದಿನವೆನಿತೊ
ಒದವುತಿರೆ ಸಂಜೆಯುಂಜುವ ದಿನಗಳಿನ್ನೆನಿತೊ
ಮುದದಿ ನೀ ಕರುಣಿಸಿರುವಿಂದೆಂಬ ದಿನವೆನಗೆ
ಸುದಿನವೈ ನಿನ್ನ ಮೆಲ್ಲಡಿಯ ಸೇವಿಪ ಬಗೆಗೆ || ೪ ||

ಹರಿದ ನಿನ್ನೆಯ ಹುಡುಕಿ ನಿನ್ನ ಕಾಂಬವರುಂಟೆ?
ಬರುವ ನಾಳೆಯನರಸಿ ನಿನ್ನನೊಲಿಸುವರುಂಟೆ?
ಇಂದೆಂಬುದಿದು ನಿನ್ನ ಮಂದಹಾಸೋದ್ಭವವು.
ಮುಂದಿನಾ ದಿನವೆಂತೊ ಹೇಳಲಿನ್ನಾರಳವು? || ೫ ||

ನಾಳೆ ನಿನ್ನಯ ಬಾಹುಪಾಶದಲಿ ಸಿಲುಕುವೆನು,
ನಾಳೆ ನಿನ್ನಯ ಪಾದಮೂಲದೊಳೆ ಬದುಕುವೆನು;
ಇಂದಿನಾ ಜೀವನಕೆ ಕೈನೀಡದಿರು ಕೇಳು
ಮುಂದಿನಾ ದಿನದ ಸಾಮ್ರಾಜ್ಯವನು ನೀನಾಳು. ‖ ೬

ನಿನ್ನೆ ಸಂಜೆಯಲಿ ನಿನ್ನಯ ಪದವನಗಲಿದೆನು,
ಮೆಲ್ಲನಿಂದಿನ ನಾವೆಯಿಂದಿಲ್ಲಿಗೈದಿದೆನು.
ಕಾಲಶರಧಿಯ ತೆರೆಯ ಮೇಲೆ ತೇಲುವೆ ನಾನು;
ಬೀಳುಗುಂಡಿಳಿಯಿಸುವುದೆಲ್ಲಿ? ತಿಳಿದಿಹೆ ನೀನು. ‖ ೭

---

## ಮಸಣ.

ಇಲ್ಲಿ ಮಲಗಿದ ಜನರ ಹೆಸರೆತ್ತಿ ಕರೆಯದಿರು
ಸೊಲ್ಲನಾಲಿಸರವರು, ಬರಿದೆ ಹಂಬಲಿಸದಿರು.
ಜೀವನದ ಸಮರದಲಿ ಬಳಲಿ ಬೆಂಡಾದವರು
ತಾವಳಲನಾರಿಸಲು ದೀರ್ಘನಿದ್ರೆಯೊಳಿಹರು. ‖ ೧

ಇರುಳಿಡೀ ರೋದಿಸಿದ ಕಿರುಗೂಸು ಮುಂಜಾವ
ಕೆರಡು ಗಳಿಗೆಗಳಿರಲು ಸವಿದು ತಾಯ್ಮೊಲೆ ಹಾಲ
ಮರೆದವಳ ಮೈಮೇಲೆ ಕಣ್ಮುಚ್ಚುವಂದದಲಿ
ಒರಗಿರುವರೀ ಜನರು ಮೃತ್ಯುವಿನ ತಕ್ಕೆಯಲಿ. ‖ ೨

ಸಿರಿಯ ಸುಗ್ಗಿಯ ಕಂಡು ಹಬ್ಬದೂಟವನುಂಡು,
ಹರಯದೇಣಿಯ ತುತ್ತತುದಿಯ ಮೆಟ್ಟಿಲನೇರಿ,
ಕರೆದು ಮಕ್ಕಳ ತನ್ನ ಬಳಿಗೆ, ಹೋಗುವೆನೆಂದು
ಹೊರಟ ನರೆದಲೆಯಜ್ಜ ಬಂದು ಮಲಗಿಹನಿಲ್ಲಿ. ‖ ೩

ಇಂದು ನಿರಶನ, ನಾಳೆಯುಣಿಸಿಲ್ಲ, ಮನೆಯವಳು
ಬಂದು ಗಜರುವಳು, ಮಗುವಳುತಿಹುದು, ಬಲವೆಲ್ಲ
ಕುಂದಿ ಹೋಯಿತೆನುತ್ತ ಹಲವು ಮಕ್ಕಳ ತಂದೆ
ನೊಂದು ಕಂಬನಿಗರೆದು ಮಲಗಿರುವ ತಾಣವಿದು. ‖ ೪

ಬಲವುಂಟು, ಗೆಲವುಂಟು, ಸಿರಿಯುಂಟು ತನಗೆನುತೆ
ಸೆಲವನೆಲ್ಲವ ಹುಲ್ಲಹಿಡಿಗೆ ಬಗೆದಾ ಮೇಲೆ
ಕನಸಿನಂತಿರೆ ವಿಭವ ಮರೆಯಾಗೆ, ನರಿನಾಯ್ಗೆ
ಉಣಿಸಾದ ಬಲಶಾಲಿ ನಡೆತಂದನೀಯೆಡೆಗೆ. ॥ ೫ ॥

ಮನ್ನಿಸದು ಲೋಕ, ಕಣ್ಣೆತ್ತಿನೋಡದು ನೇಹ,
ಬನ್ನಗಳು ಬೆಂಬಿಡವು, ಬೆನ್ನೊಳಿರೆ ಬಡತನವು
ತನ್ನ ನೆಳಲೇ ತನಗೆ ವೈರಿಯಾಗಲು ಸುರಿವ
ಕಣ್ಣೀರಿನೊಡನಾಡಿ ಯೆಡೆಗೊಂಡ ಭೂಮಿಯಿದು. ॥ ೬ ॥

“ನೀರಸೇತಕೆ ಬಾರನಕಟ? ಸಂಜೆಯು ಕಂಡು
ಗಾರಾಗುತಿದೆ ಮನವು, ಮನೆಯೊಳೊಬ್ಬಳೆ” ಎಂದು
ಸೇರಿ ಮನೆಬಾಗಿಲನು ಬಿಸುಸುಯ್ವ ಕೋಮಲೆಯ
ದಾರಿಯನು ಕತ್ತಲೆಯೊಳಡಗಿಸಿದ ಮಸಣವಿದು. ॥ ೭ ॥

ಕಡೆಗಣ್ಣ ಕುಡಿನೋಟವೆಳೆಯಳನು ನಾಚಿಸಲು
ಹಿಡಿದು ಮಾಲೆಯ, ಮಧುರ ಮಂದಹಾಸವ ಬೀರಿ
ಮದುವಣಿಗನೊಪ್ಪುತಿರಲವನ ಕೈಗಳ ಬಿಗಿದು
ಪದೆದು ಕೊಂಡೊಯ್ದೊರಗಿಸಿದ ರುದ್ರಭೂಮಿಯಿದು ॥ ೮ ॥

ಹೊಸ ಹರಯವೇರುತಿರೆ, ಹೊನಪು ಹೊಸಲೇರುತಿರೆ
ದೆಸೆಯೊಳರಮನೆಗಟ್ಟುತಿರುವ ತರುಣನ ಮೇಲೆ
ಬಿಸಜದೆದೆ ಹೀರಿ ಮಲಗಿಸುವ ದುರುದುಂಬಿವೊಲು
ಮಸಗಿ ಮೇಲ್ವಾಯ್ದ ಮೃತ್ಯುವ ಹುಟ್ಟು ನಾಡಿದುವೆ. ॥ ೯ ॥

ನಲಿನಲಿಯುತಿದ್ದ ಬಾಲನು ಬಂದು ತಾಯೊಡನೆ
ತಲೆ ಬೇನೆ ತನಗೆಂದು ಹಾಸಿಗೆಯ ಹಿಡಿದಿರಲು,
ಗುಣವಾಯಿತೆಂದು ತೋರಿಸುತವನ ದೇಹಕ್ಕೆ
ಹೆಣವೆಂಬ ಹೆಸರಿತ್ತ ಸಾವಿಂಗೆ ಬೀಡಿದುವೆ. ॥ ೧೦ ॥

ಮಾತು ಬಾರದ ಹಸುಳೆ ಬಾಯಾರೆ ಬಾಯೊಡೆದು
ಮಾತೆಯನು ನೋಡುತಿರಲಾ ಮುಗುದೆ ಮೊಲೆಯೂಡಿ
ಪ್ರೀತಿಯಿಂ ಜೋಗುಳವ ಹಾಡಿ ಮಲಗಿಸೆ ಮಗುವ
ನಾ ತಾಣದಿಂದೊಯ್ದ ಮೃತ್ಯುವಿನ ಠಾವಿದುವೆ. ॥ ೧೧ ॥

ಆರಾರು ಮಲಗಿಹರೊ? ಎಲ್ಲೆಲ್ಲಿ ಅಡಗಿಹರೊ
ಸಾರುವಾ ಜನರುಂಟೆ ಈ ಮಸಣದೆಡೆಯಲ್ಲಿ?
ಕಾರಿರುಳು ಕೊಂಡೊಯ್ದ ತಾರೆಗಳ ಲೆಕ್ಕವನು
ತೋರಿಸುವನಾರುಂಟು ದೇವನೊಬ್ಬನ ಹೊರತು? || ೧೩

ದೊರೆಯ ಬಳಿಯಲಿ ಬಂದು ಆಳು ಮಲಗಿಹನಂತೆ,
ಸಿರಿಯರಸನೆಡದಲ್ಲಿ ಭಿಕ್ಷು ಬಿದ್ದಿಹನಂತೆ,
ಕವಿಯ ಪಕ್ಕದೊಳೆ ವಂಚಕನು ನಿದ್ರಿಪನಂತೆ.
ಭುವನದಲಿ ಭೇದ, ಮಸಣದಿ ಭೇದವಿಲ್ಲಂತೆ. || ೧೪

ಮಲಗಿದರು ಮಲಗಿರಲಿ! ಹೆಸರೆತ್ತಿ ಕರೆಯದಿರು
ಕಳೆದು ಹೋದವರೊಡನೆ, ಕಳೆಗು ಹೋಯಿತು ಹೆಸರು.
ಬಳಲಿ ಬೆಂಡಾಗಿಹರು ಬದುಕುಹೋರಾಟದಲಿ,
ಕೊಳಲಿ ಚಿರಶಾಂತಿಯನನಂತ ನಿದ್ರೆಯೊಳಿರಲಿ. || ೧೫

ಗುಣಗಳಿರಬಹುದು, ಅವಗುಣಗಳೇ ಇರಬಹುದು
ಗುಣದೋಷಗಳು ಸುಟ್ಟು ಹೋದುವೈ ಚಿತೆಯೊಳಗೆ.
ಹೆಣವಾದ ಮೇಲೆ ತನು ತುಲನೆ ಮಾಡುವೆಯೇಕೆ
ಹೆಣಕೆ ಹೆಸರೊಂದೆ. ವಿವಿಧತೆಯಿಹುದು ಜೀವನಕೆ. || ೧೬

ಇಂದು ಹಬ್ಬವು, ಬಂಧುಬಾಂಧವರು ನೆರೆದಿಹರು,
ಬಾಂದಳವ ಕೀಲ್ಸೈಸುತಿಹುದು ವಾದ್ಯದ ದನಿಯು,
ಅಂದು ನಿಮ್ಮನು ಬಿಟ್ಟು ತನ್ನ ದಾರಿಯ ಹಿಡಿದ
ಕಂದನೆಲ್ಲಿಹನು? ಬರುವನೆ ಮನೆಗೆ ಹೇಳಯ್ಯ. || ೧೭

ಮಗಳ ಮದುವೆಯು ನಾಳೆ, ಧಾರೆಯೆರೆವಧಿಕಾರ
ಜಗದೊಳೆನಗೊಬ್ಬಗೇ ಹೆರರಿಗಿಲ್ಲಾ ಎನುತೆ
ಸಡಗರಿಸಿ ಸೊಬಗಿನ ವಿವಾಹಮಂಡಪದೊಳಗೆ
ಅಡಿಯಿಡುವನೇ ಮಡಿದ ಜನಕನಿದನೆಣಿಸಯ್ಯ || ೧೮

ಮದುವೆಯಾದಿನಿಯಳನು ಮಾತನಾಡಿಸಲಿಲ್ಲ,
ಮುದದೊಳವಳನು ಕೂಡುತಾನಂದ ಪಡಲಿಲ್ಲ,
ಚದುರೆಯಳ ಮೆಲ್ಲೆದೆಯ ರಸಿಕತೆಯ ಸವಿ ನೋಡೆ
ಮದುವಣಿಗನೈತಹನೆ ಉಸಿರು ನಿಂತಾಮೇಲೆ?. || ೧೯

ಮಸಣಕ್ಕೈದಿದ ಜನರು ಮಾತನಾಡುವರಲ್ಲ,
ಹೆಸರೆತ್ತಿ ದೂಷಿಸಲು ಕಿನಿಸುಗೊಂಬವರಲ್ಲ,
ಬಳಲಿಹರು ಬಳಲಿಹರು ಜೀವನದ ಸಮರದಲಿ,
ಮಲಗಿಹರು ಮಲಗಿಹರು ಕೊನೆಯಿರದ ನಿದ್ದೆಯಲಿ. || ೧೯ ||

ನೆಲವ ಕತ್ತಲೆ ಮುಸುಕೆ, ನೆಳಲು ಭೂತಗಳಂತೆ
ಬಳೆಯುತಿರೆ, ತರಣಿ ಪಡುಗಡಲೊಳಗೆ ಮುಳುಗುತಿರೆ
ಕರೆದು ಗೂಡಿಗೆ ಹಾರಿ ಬರುವ ಹಕ್ಕಿಗಳೊಡನೆ
ಬರುವನೇ ಮಸಣವನು ಮರೆಗೊಂಡ ಮಾನವನು?. || ೨೦ ||

ಬಾರನೈ ಬಾರನೈ ಮಸಣವನು ಮರೆಹೊಕ್ಕು
ಧಾರಿಣಿಯ ಬವಣೆಯನು ಕಣ್ಣೆತ್ತಿ ನೋಡುವನೆ?
ತಾವರೆಯನೊರಗಿಸಿದ ತಂಗಾಳಿಯಾತಂಗೆ
ಸೋವನಾಗಿಸಿತವನ ದೇಹವನು ಕೊರಗಿಸಿತು. || ೨೧ ||

ಆಗಸದಿ ಚಂದಿರನು ಮೂಡಿ ಬಾರೆಂದವನ
ಕೂಗಿ ಕರೆದರೆ ಬಾರಸಯ್ಯ, ನಿನ್ನಯ ಶಿರಕೆ
ತಾರಕಿಗಳಿಂದ ಸಿರಿಮುಡಿಯ ಮಾಡಿಪೆನೆನಲು,
ತೋರನಾತನು ಮೊಗವ ಶಾಂತಿರಾಜ್ಯವ ತೊರೆದು. || ೨೨ ||

ಮಾಮರದ ಚಿಗುರೆಡೆಯ ಪೀಠವನಲಂಕರಿಸಿ
ಸಾಮದಿಂ ಹಾಡುತಿಹ ಕೋಗಿಲೆಯ ಕಲರವವು
ಊರನೆಚ್ಚರಿಸಿದರು, ಸಿದ್ದೆಯನು ಬಿಟ್ಟೆದ್ದು
ಬಾರನಾತನು, ದನಿಯ ಮೇರೆಯನು ಮೀರಿಹನು. || ೨೩ ||

ಸಾಲಾಗಿ ಹಾರುತಿಹ ಮಲ್ಲಳಿಯ ಝೇಂಕಾರ
ಕೇಳುವುದೆ ಆತನಿಗೆ? ಬಿರಿವ ಮುಗುಳಿನ ಸಾರ
ಸೂರೆಗೊಳ್ಳುವುದೆ ಆತನ ಬಗೆಯನಿನ್ನಾವ
ಕಾರಣದೆ ಕಣ್ಮುಚ್ಚಿದವನು ಕಣ್ದೆರೆಯುವನು?. || ೨೪ ||

ಆವಸಂತನು ಬಂದು ಚಿಗುರೆಂಬ ಕಪ್ಪವನು
ಸಾಮಂತನಂತೆ ತಂದೊಪ್ಪಿಸಲು ಫಲವೇನು?
ಆರು ನೀನೆಂದವನ ಮೋರೆನೋಡಿದರುಂಟೆ?
ಬಾರನೈ ಮಡಿದವನು ಶಾಂತಿವಡೆದಾ ಮೇಲೆ. || ೨೫ ||

ಇಂತು ಮರೆದೊರಗಿದರ ಹೆಸರೆತ್ತಿ ದೂಷಿಸುತ
ಪಂತವನು ಮೆರೆಯಿಪೆಯ? ಹೇಳು ಕಣ್ಣೀರಾಣೆ
ಕರುಣೆಯನು ಕೊಡಲಿಲ್ಲವೇ ನಿನಗೆ ಜಗದೊಡೆಯ?
ಹರಹರಾ, ತಾನೆ ಕರುಣಿಸಿದನೇ ಕಲ್ಲೆದೆಯ?. || ೨೬

ಸಾಕಯ್ಯ ನಿಂದೆ ಮಡಿದವರನೇಳಿಸಿದುದಕೆ
ಬೇಕಯ್ಯ ಮನದ ಮರುಕದ ಕಂಬನಿಗಳೆರಡು
ಯಶವ ಪಡೆದಿರಲಿ ಅಪಯಶವ ತಾ ಗಳಿಸಿರಲಿ
ಮಸಣವನು ಹೊಂದಿ ಪರಿಪೂತರಾಗಿಹರವರು || ೨೭

ಮುಕುಟ ಕೆಡುವುದು, ಕೈಯ ದಂಡ ಧರೆಗುರುಳುವುದು,
ಸಕಲ ವೈಭವ ಸೂರೆಯಹದು, ಮೃತ್ಯುವ ಕಂಡು
ಕವಿ ಕರವ ಮುಗಿಯುವನು; ವೀಣೆಯನು ಗಾಯಕನು
ಜವದಿ ಬದಿಗಿಟ್ಟು ಮೃತ್ಯುವ ಬೆನ್ನನೈದುವನು. || ೨೮

ವಿಧಿಗೈದ ಬಗೆಬಗೆಯ ವೇಷಗಳ ಚಂದವನು
ಹುದುಗಿಸುವ ಕೆಲಸವೊಂದೇ ನೋಡೆ ಮಸಣಕ್ಕೆ
ಜಗದೊಳುದಿಸಿದರೆಲ್ಲ ಬದುಕಿದರೆ ಧಾರಿಣಿಯ
ಅಗಲ ಸಾಕಾಗುವುದೆ ಜೀವನಗಳಾಟಕ್ಕೆ?. || ೨೯

ಕೆಲಸ ತೀರಿದ ಜನರು ಬಂದು ಮಲಗುವರಿಲ್ಲಿ
ನೆಲಸಲನ್ಯರಿಗೆ ಧಾರಿಣಿಯೊಳೆಡೆ ಮಾಡುವರು.
ಜರೆಯೆಡಸೆ ಜೀವನವು ಮರೆಗೊಂಬ ತಾಣವಿದು
ಜನನಮರಣವ ಹಿಡಿದು ಮುರಿದುಂಬ ಮಸಣವಿದು. || ೩೦

---

## ಹಳೆಯ ನೆನಹು.

ಹರಿವುದೆನ್ನ ಮನವು ಹಿಂದೆ ಕಳೆದ ದಿನದ ಹಾದಿ ಹಿಡಿದು
ಪರಿಮಳಕ್ಕೆ ಹಾರುತಿರುವ ತುಂಬಿಯಂತೆ ಸುಳಿದು ಸುಳಿದು
ಬಳಲುತಿಹುದು, ಮಾಯವಾದ ಕಾಲಗಳನು ನೆನೆದು ನೆನೆದು
ಗಳಿಯಿಪಶ್ರು ಧಾರೆಯೆನ್ನ ಕದಪನಿಂದು ತೊಳೆಯುತಿಹುದು. || ೧

ಇಂದು ಹರಯವೇರುತಿರಲು, ಸಂತಸದಲಿ ನಲಿವ ಮಕ್ಕ
ಳೊಂದು ಮುಗುದತನವ ನೋಡಿ, ಬಾಲ್ಯವೇಕೆ ಹೋಯಿತೆಂದು
ನೊಂದು ಬೇಸಗೊಳ್ಳುವೆನ್ನ ಮನದ ದನಿಯು ಸಂಗಡಕ್ಕೆ
ಬಂದು ಹಳೆಯ ನೆನಹು ತನ್ನ ಹಾಡನೀಗ ಹಾಡುತಿಹುದು. ॥ ೨ ॥

ಎಮ್ಮ ಮನೆಯ ಮುಂದೆ ಕಾಂಬ ಮಾವಿನಡಿಯ ನೆಳಲ ನೋಡೆ
ಜುಮ್ಮು ದಟ್ಟುತಿಹುದು ದೇಹವಲ್ಲಿ ನೆರೆದ ಮಕ್ಕಳೀಗ
ಎಲ್ಲಿರುವರೊ? ತಿಳಿಯೆನಾವ ಮರದ ನೆಳಲನಾಶ್ರಯಿಪರೊ?
ಬಲ್ಲನಾರು? ಕಾಣಲಾರೆನಂದಿನೆನ್ನ ಸಂಗಡಿಗರ. ॥ ೩ ॥

ಅಂದಿನೊಂದು ಶೋಭೆಯಿಲ್ಲ, ಅಂದಿನೊಂದು ಚಂದವಿಲ್ಲ
ಅಂದಿನೊಂದು ಸೊಬಗದಿಲ್ಲವೆಮ್ಮ ಮಾವಿನಡಿಯೊಳೀಗ
ರೆಂಬೆಯೊಂದು ನೆಲಕೆ ಬಾಗಿ, ಮೆಲ್ಲೆಲರ್ಗೆ ತೂಗಿತೂಗಿ
ಕಾಂಬುದಕಟ ಶೋಕದಿಂದ ಕರಗಿ ಕೊರಗಿ ಕಂದಿದಂತೆ. ॥ ೪ ॥

ಎಳೆಯನೊಬ್ಬ ತಮ್ಮನಿದ್ದನವನೊಳೆನಗೆ ಪ್ರೇಮವಧಿಕ,
ಮೊಳೆಯೆ ಹಲ್ಲು, ಸುರಿಯೆ ಜೊಲ್ಲು ಮುದ್ದು ಮಾತಿನಿಂದಲೆನ್ನ
ಕರೆದುಕರೆದು ಬೆನ್ನಬಿಡದೆ ಮಾವಿನಡಿಯ ನೆಳಲಿಗೆಂದು
ಬರುತಬರುತ ಬೀಳುತೇಳುತಿದ್ದನವನ ಮರೆವೆನೆಂತು? ॥ ೫ ॥

ಒಂದು ದಿನದೊಳೆಂದಿನಂತೆ ಆಟವಾಡುತಿರಲು ನಾನು
'ಕಂದ! ಹೇಳು ಎಮ್ಮನೇಕೆ ಬಿಟ್ಟು ಹೋದೆ!' ಎಂದೆನುತ್ತೆ
ತಂದೆ ಕೂಗಲದನು ಕೇಳಿ, ಬೆದರಿ ಭಯದೊಳೋಡುತಿರಲು
ಅಂದು ಕಂಡೆನೆನ್ನ ತಮ್ಮ ಹಾಸಿಗೆಯಲಿ ಮಲಗಿದುದನು. ॥ ೬ ॥

ಒರಗಿದಾತನೇಳಲಿಲ್ಲ, ಮಂಜು ಬೀಳ್ವ ಭರಕೆ ಬಳುಕಿ
ಧರೆಗೆ ಮುರಿದು ಕೆಡೆವ ಮುಗುಳಿನಂತೆ ತಮ್ಮ ಮಲಗಿರಲ್ಕೆ,
ಸೆಳೆದು ಬಿಗಿದು ತೋಳ್ಗಳಿಂದ, "ಮಗನೆ! ಒಬ್ಬನಾದೆ ಎಮಗೆ
ನಲಿವುದಣ್ಣ ಕಣ್ಣ ಮುಂದೆ" ಎನುತೆ ಮಾತೆ ರೋದಿಸಿದಳು. ॥ ೭ ॥

ಅವನ ನಯನತೇಜವಿಂದು ಗಗನತಲದ ತಾರೆಯಾಗಿ
ಭುವನಗಳನು ಬೆಳಗುತಿರಲು ಬಹುದು; ತೊದಲು ನುಡಿಗಳೀಗ
ಗಿರಿಯ ದರಿಯ ವನದ ನಡುವೆ ಗಾನವಾಳ್ವ ನದಿಯ ದನಿಯ
ಸರಿಸದಲ್ಲಿ ಪಡಿನುಡಿಗಳ ಕೂಟದಲ್ಲಿ ಕೇಳಬಹುದು. ॥ ೮ ॥

ಅಲ್ಲಿ ತೆಂಗು ಕೌಂಗಿನಿಂದ ಹೊನ್ನೆ ಸುರಗಿಮರಗಳಿಂದ
ಮಲ್ಲಿಗೆಗಳ ಬನಗಳಿಂದ ಕೂಡಿದೆಮ್ಮ ತೋಟದೊಳಗೆ
ಮಲ್ಲಳಿಗಳ ಮಂಜುಘೋಷವೆಲ್ಲಿ ಕೇಳ್ವುದಲ್ಲಿ ಬೆಳೆದ
ಹುಲ್ಲು ತಮ್ಮನೊರಗಿದೆಡೆಗೆ ಕಾವಲಾಗಿ ಕಾಂಬುದೀಗ || ೯

'ಅಣ್ಣ! ಮಾವಿನಡಿಗೆ ಬರುವ ತಮ್ಮನಿವನ ಕರೆಯೊ' ಎಂದು
ಕಣ್ಣನೀರ ಮಿಡಿಯುತಿಹನೊ! ನಿಮ್ಮ ನಾನು ನೋಡುತಿರಲು
ಎನ್ನನೇಕೆ ಮರೆತಿರೆಂದು ತೊದಲುನುಡಿಯನಾಡುತಿಹನೊ
ತನ್ನ ತಾನೆ ಹಿಡಿದು ಮೌನದಿಂದ ಮಾತನಾಡದಿಹನೊ! || ೧೦

ಆವನೊಂದು ಕೂಟದಿಂದ ಪ್ರೇಮವಾವುದೆಂದು ಕಲಿತೆ,
ಆವನೊಂದು ನೋಟದಿಂದ ನೋವನೆಲ್ಲವನ್ನು ಮರೆತೆ
ಆವನೆಳೆಯ ನಗೆಯೆ ಮನದ ತಮಕೆ ಜೊನ್ನವಾದುದವನ
ಸಾವ ವರೆಗೆ ಮರೆಯಲುಂಟೆ ಎನ್ನ ಬೆನ್ನೊಳುದಿಸಿದವನ? || ೧೧

ಮಗನೆ! ಎಂದು ನುಡಿಯುವನಿತು ಹರಯವಾಗಲಿಲ್ಲವೆನಗೆ
ಮಗನೆ! ಎಂದೆ ಕರೆವೆನಿನ್ನ ಲೋಕವೆಲ್ಲ ಕೇಳಿ ನಗುಗೆ
ಜಗದಿ ನಮ್ಮ ವಂಶವಿರಲಿ! ಎಂದು ವಿಧಿಯು ನಿಯಮಿಸಿದರೆ
ಮಗನೆನಿಸುತೆ ಹುಟ್ಟು ತಮ್ಮ ನಿನ್ನ ಮರೆಯದಣ್ಣನೆನಗೆ. || ೧೨

ಊರ ಬಿಟ್ಟು ಬಿಜ್ಜೆಗಾಗಿ ದೇಶದೇಶದಲ್ಲಿ ಸುತ್ತಿ
ತಾರುತಿರಲು ದೇಹ, ಹುಟ್ಟು ಮನೆಯ ನೋಡುವಳ್ತಿಯಿಂದ
ದಾರಿ ನಡೆದು ಮನೆಯ ಸೇರಿ, ಮಾವಿನಡಿಯ ನೆಳಲ ಕಂಡು
ಭೋರೆನುತ್ತೆ ಮನದಶೋಕ ಹರಿಯುತಿದೆ ಪ್ರವಾಹಗೊಂಡು. || ೧೩

ತಂದೆತಾಯ್ಗಳಣ್ಣ! ನಮ್ಮ ಬಂಧುಬಳಗವೆಲ್ಲ ನಿನ್ನ
ನೆಂದೊ ಮರೆತು ಮನದೆ ನಿನಗೆ ತಾವನೀಯದಿರಲು ಬಹುದು.
ಕಂದ! ಕಿನಿಸನಾನಬೇಡ! ಎನ್ನ ಬೆನ್ನಹಿಂದೆ ನಡೆದು
ಬಂದ ನಿನ್ನ ರೂಪಿನರಿವು ಬಗೆಯಗಣಿಗೆ ರತ್ನವಹುದು || ೧೪

ಎರಡು ದಿವಸದಿಂದ ನಿನ್ನ ಹಿರಿಯನಾಗಿ ಹುಟ್ಟಿದುದಕೆ
ಬರೆಹವನ್ನು ತಿಳಿದನೆಂಬ ಹೆಮ್ಮೆ ಎನ್ನೊಳಿರುವುದಕ್ಕೆ
ಎಳೆಯ! ಮೂರುದಿನಗಳಾಯುವೆನಗೆ ದೊರೆತ ಕಾರಣಕ್ಕೆ
ಹಳೆಯ ನೆನಹಿನೂರಿನೊಳಗೆ ನಿನ್ನನರಸುಗೈವೆ ಸಾಕೆ? || ೧೫

ಮಲಗು, ಮಗನೆ, ಮಲಗು ಪ್ರಕೃತಿದೇವಿಯಿಟ್ಟ ತೊಟ್ಟಿಲೊಳಗೆ
ನೆಲದ ಮಾಟ ನಿನ್ನ ಮುಟ್ಟದಿರಲಿ! ನಿನ್ನ ನಿದ್ದೆಯೊಳಗೆ
ಮನವನೊಡೆದು ಮೇಲೆ ಹಾರಿ ಬರುವ ಭಾವವಿಂದು ನಿನ್ನ
ನೆನೆದುನೆನೆದು ಜೋಗುಳವನು ಹಾಡುತಿಹುದು ಮಲಗೊ ತಮ್ಮ! ॥ ೧೬ ॥

---

## ಮರವು.

ಜಗವನಾಂ ಮರೆದಪೆನು, ಜಗವೆನ್ನ ಮರೆತಿರಲಿ,
ಜಗದೆನ್ನ ಸಂಬಂಧವನು ಮರವು ಮರೆಯಿಸಲಿ.
ಜಸವೆಂಬ ಪರಿಮಳಕೆ ಮನವೆನ್ನುವಳಿ ಮೊರೆಯೆ,
ದೆಸೆಯೆಂಬ ಕುಸುಮದಲಿ ದೊರೆವುದಾವುದು? ಸೆರೆಯೆ. ॥ ೧ ॥

ರಸೆಯೊಳಗೆ ಕೀರ್ತಿಕವಿರತ್ನಗಳ ಸದ್ಗುಣದೆ
ಮಿಸುಪ ಕಂಠಾಭರಣವನು ಮಾಡುವವಸರದೆ
ಬಗೆಗೊಂಬ ಮಣಿಯೊಂದು ನೆಲದಡಿಯೊಳಡಗಿರಲಿ
ಜಗವನದು ಮರೆದಪುದು, ಜಗವದನು ಮರೆತಿರಲಿ. ॥ ೨ ॥

ಆಗಸದ ಮಧ್ಯದಲಿ ತಾರೆಗಳು ಥಿಂಕಿಡಲು,
ರಾಗದಿಂ ರಾಜನ್ಯತಂದು ನೆರೆಮೆರೆದಿರಲು
ತಾರಗೆಯದೊಂದುರುಳಿ ಕತ್ತಲೆಯೊಳಡಗಿರಲಿ,
ಜಗವನದು ಮರೆದಪುದು, ಜಗವದನು ಮರೆತಿರಲಿ. ॥ ೩ ॥

ಹಿಸುಣೆಂಬ ಕೂರಲಗು, ಹೆಸರೆಂಬ ಹರಿಣದೆಡೆ
ಗಸವಸದೆ ಬೆಂಬತ್ತೆ ಬೇಡನೋಡಿಸಿ ಕಾಡೆ
ಜಸವನಾಶಿಸದೆ ಮರವಿನ ಗುಹೆಯೊಳಡಗಿರಲಿ.
ಜಗವನದು ಮರೆದಪುದು, ಜಗವದನು ಮರೆತಿರಲಿ. ॥ ೪ ॥

ಅಳಿವೆಂಬ ವಾಹನದಿ ಪರಲೋಕಮಂದಿರಕೆ
ತಳುವದೀ ದೇಹವನು ಕಳೆದು ಹೋಪವಸರಕೆ
ನೆನಹೆನ್ನ ಮರೆತಿರಲಿ, ಮರವು ನೆನಹಿನ್ನೊಳಿಡಲಿ
ಜಗವನಾಂ ಮರೆದಪೆನು, ಜಗವೆನ್ನ ಮರೆತಿರಲಿ. ॥ ೫ ॥

---

ಾಂಗಿನಿಂಗ ಕೆ

## ಪ್ರಾರ್ಥನೆ.

ಪಂಕವೆಡೆಗೊಂಡ ಭೂಮಿಯ ಹೃದಯ ಮಧ್ಯದ ಕ
ಲಂಕವನು ಮಳೆ ಕಳೆದು ಕೊಂಡೋಡುವಂತೆ,
ಸಂಕಟವ ಪರಿಹರಿಪ ನಿನ್ನ ಕರುಣೆಯೆ ಮನದ
ಪಂಕವನು ಕಳೆಯಲಿದುವೇ ದೇವ ಚಿಂತೆ. || ೧

ಮನೆಯ ಮೂಲೆಯೊಳಡಗಿರುವ ಕಳ್ಳನಂದದಲಿ
ಮನದ ಕತ್ತಲೆಯೊಳಡಗಿದ ದುರಾಶೆಯನು
ಜನರೊಡೆಯ! ನಿನ್ನ ದಿವ್ಯಜ್ಯೋತಿಯೋಡಿಸುಗೆ;
ಮನದ ಮಂದಿರಕೆ ಯಜಮಾನ ನೀನು || ೨

ಕೆಲಸದಿಂ ಬಳಲುತಿಹ ದಿನದ ಮೈಯ್ಯಂ ನಿದ್ರೆ
ತಿಳಿಯದಂತಿರೆ ಮುಟ್ಟುತೊರಗಿಸುವುದು;
ತೊಳಲುವಿಂದ್ರಿಯತತಿಯ ಸಂಭ್ರಮವ ಮುಟ್ಟಿ ನೀ
ಕಳೆವಂತೆ ದೇವ! ಮಾಳ್ಪುದು, ಮಾಳ್ಪುದು. || ೩

ನಿನ್ನಿಂದ ದಯೆಯ ಸಾಲವನೆನಿತು ಕೊಂಬೆನೋ
ನಿನ್ನ ಕರುಣೆಯ ನಿಧಿಯ ಮೂಲಧನವ
ಎನ್ನ ಸಾಲದ ಕರಣವಳಿಯಿಸಲು ಸಾಲ್ದಪುದು.
ಬನ್ನವದನೇನೆಂದು ನುಡಿವೆ ದೇವ. || ೪

ಎನ್ನೀ ಮನಸ್ಸಾಕ್ಷಿಪೂರ್ವಕವೆ, ಸುರಿಯುವೀ
ಕಣ್ಣೀರ ಮಸಿಯೊಳಂಕಿಸಿ ಕರಣವ
ಇನ್ನೇನೊ, ಧನಿಯೆ, ಬಗೆಯೋಲೆಯೊಳೆ ಬರೆದೀವೆ
ನಿನ್ನೊಳಾಂ ಗೈದ ಸಾಲಕೆಲೇಖವ. || ೫



